# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : **1523**
**ಸದಸ್ಯರ ಹೆಸರು** : ಶ್ರೀ ಸುನೀಲ್ ಸುಬ್ರಮಣಿ ಎಂ.ಪಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
**ಉತ್ತರಿಸಬೇಕಾದ ದಿನಾಂಕ** : 18.03.2021
**ಉತ್ತರಿಸುವ ಸಚಿವರು** : ಮುಖ್ಯಮಂತ್ರಿಗಳು

*****

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕೃಷಿಗೆ ಉಪಯೋಗಿಸುವ ಎಷ್ಟು ಹೆಚ್.ಪಿ., ವರೆಗಿನ ಪಂಪ್‌ಸೆಟ್ ಗಳಿಗೆ ಉಚಿತ ವಿದ್ಯುತ್ ನೀಡಲಾಗುತ್ತಿದೆ: (ವಿವರ | ರಾಜ್ಯ ಸರ್ಕಾರದ ನೀತಿಯಂತೆ ರಾಜ್ಯದಲ್ಲಿನ ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿನ 10 ಹೆಚ್.ಪಿ ಮತ್ತು ಒಳಗಿನ ಕೃಷಿ ನೀರಾವರಿ ಪಂಪ್‌ಸೆಟ್‌ಗಳಿಗೆ ಎಲ್.ಟಿ 4 (ಎ) ಜಕಾತಿಯಡಿ ಉಚಿತ ವಿದ್ಯುತ್ ಸೌಲಭ್ಯವನ್ನು ಒದಗಿಸಲಾಗುತ್ತಿದೆ. |
| ಆ) | ಕಾಫಿ ಬೆಳೆಯುವ ರೈತರಿಗೂ ಈ ಸೌಲಭ್ಯವನ್ನು ನೀಡಲು ಇರುವ ಸಮಸ್ಯೆಗಳೇನು: (ಮಾಹಿತಿ ನೀಡುವುದು) | • ರಾಜ್ಯ ಸರ್ಕಾರದ ನೀತಿಯಂತೆ ರಾಜ್ಯದಲ್ಲಿನ 10 ಹೆಚ್.ಪಿ ಮತ್ತು ಒಳಗಿನ ಕೃಷಿ ನೀರಾವರಿ ಪಂಪ್‌ಸೆಟ್‌ಗಳಿಗೆ ಎಲ್.ಟಿ 4 (ಎ) ಜಕಾತಿಯಡಿ ಉಚಿತ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. ಈ ಉಚಿತ ವಿದ್ಯುತ್ ಸರಬರಾಜುವಿಗಾಗಿ ತಗಲುವ ವೆಚ್ಚವನ್ನು ಸರ್ಕಾರವು ಭರಿಸುತ್ತಿದ್ದು, ಸದರಿ ವೆಚ್ಚವನ್ನು ಆಯವ್ಯಯದಲ್ಲಿ ಹಂಚಿಕೆ ಮಾಡಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಒದಗಿಸಲಾಗುತ್ತಿದೆ.<br>• ರಾಜ್ಯದಲ್ಲಿ ವಿವಿಧ ಪ್ರವರ್ಗಗಳ ವಿದ್ಯುತ್ ಬಳಕೆಗೆ ಜಕಾತಿ ನಿಗದಿಪಡಿಸುವುದು ಮತ್ತು ದರ ನಿಗದಿಪಡಿಸುವುದು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ವ್ಯಾಪ್ತಿಗೊಳಪಟ್ಟಿರುತ್ತದೆ.<br>• ರಾಜ್ಯದಲ್ಲಿನ ಹಾಗೂ ಕೊಡಗು ಜಿಲ್ಲೆಯಲ್ಲಿನ ಎಲ್ಲಾ ಖಾಸಗಿ ತೋಟಗಾರಿಕೆ ನರ್ಸರಿಗಳು, ಕಾಫಿ, ಟೀ ಮತ್ತು ರಬ್ಬರ್ ಪ್ಲಾಂಟೇಷನ್‌ಗಳಲ್ಲಿ ಉಪಯೋಗಿಸುವ ಎಲ್ಲಾ ಸಾಮರ್ಥ್ಯದ ನೀರಾವರಿ ಪಂಪ್‌ಸೆಟ್‌ಗಳಿಗೆ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಆದೇಶಾನುಸಾರ ಬಿಲ್ಲು ಮಾಡಿ ಬಿಲ್ಲು ಮೊತ್ತವನ್ನು ಪಾವತಿಸುವಂತೆ ತಿಳಿಸಲಾಗುತ್ತಿದೆ. |
| ಇ) | ಕೊಡಗು ಜಿಲ್ಲೆಯಲ್ಲಿನ ರೈತರಿಗೆ ವಿದ್ಯುತ್ ಬಿಲ್ ಪಾವತಿಸುವಂತೆ ನೋಟೀಸ್ ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ, ಇದನ್ನು ನಿಲ್ಲಿಸಲು ಸರ್ಕಾರದ ಕ್ರಮಗಳೇನು? (ವಿವರ ನೀಡುವುದು) | |

ಸಂಖ್ಯೆ: ಎನರ್ಜಿ 78 ಇಬಿಎಸ್ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ